# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1142 (1405) |
| ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ |
| ಉತ್ತರಿಸುವ ದಿನಾಂಕ: | 18-03-2020 |
| ಉತ್ತರಿಸುವವರು | ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಬೆಳಗಾವಿ ಜಿಲ್ಲೆಯ ಪ್ರಸಿದ್ಧ ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನಕ್ಕೆ ಪ್ರತಿ ದಿನ ಲಕ್ಷಾಂತರ ಭಕ್ತರು ಆಗಮಿಸುತ್ತಿದ್ದು, ಯಾತ್ರಾರ್ಥಿಗಳಿಗೆ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಸರ್ಕಾರ ಗಮನಕ್ಕೆ ಬಂದಿದೆಯೇ; | ಬೆಳಗಾವಿ ಜಿಲ್ಲೆಯ ಪ್ರಸಿದ್ಧ ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನವು ಮುಜರಾಯಿ ಇಲಾಖೆಯ ಪ್ರವರ್ಗ 'ಎ' ಶ್ರೇಣಿಯ ಅಧಿಸೂಚಿತ ಸಂಸ್ಥೆಯಾಗಿರುತ್ತದೆ. ಈ ದೇವಾಲಯಕ್ಕೆ ಪ್ರತಿದಿನ ಲಕ್ಷಾಂತರ ಭಕ್ತರು ಆಗಮಿಸುತ್ತಿದ್ದು, ಯಾತ್ರಾರ್ಥಿಗಳಿಗೆ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಗಮನಿಸಿದ್ದಲ್ಲಿ, ಅದರ ಪರಿಹಾರಕ್ಕಾಗಿ ಇಲ್ಲಿಯವರೆಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತಾದಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಕುರಿತು ಹಾಗೂ ಕ್ಷೇತ್ರದ ಸಮಗ್ರ ಅಭಿವೃದ್ಧಿಗಾಗಿ ಪ್ರಧಾನ ಮುಖ್ಯ ವಾಸ್ತು ಶಿಲ್ಪಿಗಳು ಲೋಕೋಪಯೋಗಿ ಇಲಾಖೆ, ಬೆಂಗಳೂರು ಅವರಿಂದ ಸನ್ 1997 ರಲ್ಲಿ ರೂ.**50.00**ಕೋಟಿಗಳ ಅಂದಾಜು ವೆಚ್ಚದ ಮಾಸ್ಟರ್ ಪ್ಲಾನ್‌ನ್ನು (Master Plan) ತಯಾರಿಸಿಕೊಳ್ಳಲಾಗಿದ್ದು, ಸದರಿ ಮಾಸ್ಟರ್ ಪ್ಲ್ಯಾನಿನಂತೆ ಹಂತಹಂತವಾಗಿ ಅಭಿವೃದ್ಧಿಕಾರ್ಯಗಳನ್ನು ದೇವಸ್ಥಾನದ ನಿಧಿಯಿಂದ ಹಾಗೂ ಸರ್ಕಾರದ ಅನುದಾನದಿಂದ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸಲಾಗುತ್ತಿದೆ. ಈ ಕ್ಷೇತ್ರದ ಸರ್ವಾಂಗೀಣ ಅಭಿವೃದ್ಧಿಗೆ ಕ್ರಮ ಕೈಗೊಳ್ಳಲಾಗಿದೆ. ಈಗಾಗಲೇ ನಿರ್ವಹಿಸಿದ ಕಾಮಗಾರಿಗಳ ವಿವರ **ಅನುಬಂಧ**-1ರಲ್ಲಿ ಒದಗಿಸಿದೆ. |
| ಇ | ಕಳೆದ ಮೂರು ವರ್ಷಗಳಲ್ಲಿ ದೇವಸ್ಥಾನದಿಂದ ಸರ್ಕಾರಕ್ಕೆ ಬಂದ ಆದಾಯವೆಷ್ಟು; (ವರ್ಷವಾರು ಮಾಹಿತಿ ನೀಡುವುದು) | ಮುಜರಾಯಿ ದೇವಾಲಯಗಳಿಂದ ಬರುವ ಆದಾಯವು ಸರ್ಕಾರಕ್ಕೆ ಸಂದಾಯವಾಗುವುದಿಲ್ಲ. ರಾಜ್ಯದಲ್ಲಿರುವ ಮುಜರಾಯಿ ದೇವಾಲಯಗಳಲ್ಲಿನ ಆದಾಯವನ್ನು ಆಯಾಯ ದೇವಾಲಯಗಳ ಸಂಬಂಧಿಸಿದ ಖಾತೆಯಲ್ಲಿ ಸಂಗ್ರಹಿಸಿ, ದೇವಾಲಯದ ನಿರ್ವಹಣೆಗೆ, ನಿತ್ಯ ಕಟ್ಲೆ, ಹೆಚ್ಚು ಕಟ್ಲೆ, ರಥೋತ್ಸವ, ಸಿಬ್ಬಂದಿ ವೆಚ್ಚ, ಮೂಲಭೂತ ಸೌಕರ್ಯ ಅಭಿವೃದ್ಧಿ ಒದಗಿಸಲು ಹಾಗೂ ದೇವಾಲಯದ ವತಿಯಿಂದ ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳ ನಿರ್ವಹಣೆ ಮತ್ತು ಸಾರ್ವಜನಿಕ ಕಲ್ಯಾಣ ಉದ್ದೇಶ ಇತ್ಯಾದಿಗಳಿಗೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ 1997ರ ಕಾಯ್ದೆಯ ಕಲಂ 36(1)ರಡಿಯಲ್ಲಿ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಗೊಂಡ ಆಯವ್ಯಯದ ಅನ್ವಯ ಬಳಸಲಾಗುತ್ತದೆ.<br><br>ಕಳೆದ ಮೂರು ವರ್ಷಗಳಲ್ಲಿ ಬೆಳಗಾವಿ ಶ್ರೀ ರೇಣುಕಾ ಯಲ್ಲಮ್ಮ ದೇವಾಲಯಕ್ಕೆ ಸಂಗ್ರಹವಾದ ಒಟ್ಟು ರೂ.**57.71**ಲಕ್ಷಗಳು ವರ್ಷವಾರು ವಿವರ ಕೆಳಗಿನಂತಿದೆ. |

| ವರ್ಷ | ಮೊತ್ತ ರೂ.ಲಕ್ಷಗಳಲ್ಲಿ |
|---|---:|
| 2016-17 | 18.78 |
| 2017-18 | 18.68 |
| 2018-19 | 20.25 |
| **ಒಟ್ಟು** | **57.71** |

<table>
<tr>
<td>ಈ</td>
<td>ಕಳೆದ ಮೂರು ವರ್ಷಗಳ ಅವಧಿಯಲ್ಲಿ ಸದರಿ ದೇವಸ್ಥಾನದ ಅಭಿವೃದ್ಧಿಗಾಗಿ ಮಾಡಲಾದ ಖರ್ಚಿನ ವರ್ಗಾವಾರು ವಿವರ ನೀಡುವುದು;</td>
<td>ಕಳೆದ ಮೂರು ವರ್ಷಗಳಲ್ಲಿ ಬೆಳಗಾವಿ ಶ್ರೀ ರೇಣುಕಾ ಯಲ್ಲಮ್ಮ ದೇವಾಲಯದ ಅಭಿವೃದ್ಧಿಗಾಗಿ ಮಾಡಲಾದ ಖರ್ಚಿನ ವಿವರ ಕೆಳಗಿನಂತಿದೆ.
<table>
<tr><th>ಕಾಮಗಾರಿ ವಿವರ</th><th>ಮೊತ್ತ ರೂ. ಲಕ್ಷಗಳಲ್ಲಿ</th></tr>
<tr><td colspan="2">2016-17</td></tr>
<tr><td>1. ಕೂಡು ರಸ್ತೆ, ಮೆಟ್ಟಿಲು ನಿರ್ಮಾಣ, ತೆರೆದ ಚರಂಡಿ ನಿರ್ಮಾಣ, ಎಣ್ಣಿಹೊಂಡದ ಅಭಿವೃದ್ಧಿ</td><td>121.00</td></tr>
<tr><td>2. ಯಾತ್ರಿನಿವಾಸದ ಎರಡನೇ ಮಹಡಿ</td><td>80.00</td></tr>
<tr><td>3. 44 ವ್ಯಾಪಾರ ಮಳಿಗೆಗಳ ನರ್ಮಾಣ.</td><td>100.00</td></tr>
<tr><td colspan="2">2017-18</td></tr>
<tr><td>1. ಎರಡನೇ ಹಂತದ ಕುಡಿಯುವ ನೀರಿನ</td><td>3120.00</td></tr>
<tr><td>2. ವರ್ತುಳ ರಸ್ತೆ, ಕೂಡುರಸ್ತೆ, ರಸ್ತೆಗಳ</td><td>1800.00</td></tr>
<tr><td>3. ದೇವಸ್ಥಾನದ ನಿಧಿಯಿಂದ ತಂಗುದಾಣ, 275 ವಾಣಿಜ್ಯ ಮಳಿಗೆ, ವಾಹನ ನಿಲುಗಡೆ [illegible]</td><td>3053.00</td></tr>
<tr><td colspan="2">2018-19</td></tr>
<tr><td>1. 246 ಕೊಠಡಿಗಳ ಅತಿಥಿ ಗೃಹ ಕಟ್ಟಡ ನಿರ್ಮಾಣ</td><td>1533.00</td></tr>
<tr><td>2. ಪಾರ್ಕಿಂಗ್, ತಂಗುದಾಣ, ಶೌಚಾಲಯ ಮತ್ತು ಸ್ನಾನಗೃಹಗಳ ನಿರ್ಮಾಣ, ಚೆಕ್‌ಡ್ಯಾಮ್ ನಿರ್ಮಾಣ ಕಾಮಗಾರಿ</td><td>2225.00</td></tr>
</table>
</td>
</tr>
<tr>
<td>ಉ</td>
<td>ಸದರಿ ದೇವಸ್ಥಾನಕ್ಕೆ ಬರುವ ಯಾತ್ರಿಕರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದ್ದು, ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಶೌಚಾಲಯ, ವಸತಿ ಹಾಗೂ ವಾಹನ ನಿಲುಗಡೆ ಸೌಲಭ್ಯಗಳ ಅವಶ್ಯಕತೆಗಳ ಸುಧಾರಣೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ? (ಸಂಪೂರ್ಣ ಮಾಹಿತಿ ನೀಡುವುದು)</td>
<td>ಬೆಳಗಾವಿ ಶ್ರೀ ರೇಣುಕಾ ಯಲ್ಲಮ್ಮ ದೇವಾಲಯಕ್ಕೆ ಬರುವ ಯಾತ್ರಿಕರಿಗೆ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಶೌಚಾಲಯಗಳು, ವಸತಿ ಹಾಗೂ ವಾಹನ ನಿಲುಗಡೆ ಸಂಬಂಧ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.<br><br>
1. <u>ಕುಡಿಯುವ ನೀರಿನ ಸೌಲಭ್ಯ ಕಲ್ಪಿಸುವ ಬಗ್ಗೆ</u><br>
i. ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡಕ್ಕೆ ಆಗಮಿಸುವ ಲಕ್ಷಾಂತರ ಭಕ್ತರಿಗೆ ಕುಡಿಯುವ ನೀರು ಪೂರೈಸಲು 7.00 ಕಿ,ಮಿ ದೂರದಲ್ಲಿರುವ ಮಲಪ್ರಭಾ ನದಿಯ ಶ್ರೀ ರೇಣುಕಾ ಸಾಗರದಿಂದ 1.15 MLD ಸಾಮರ್ಥ್ಯದ ಪ್ರಥಮ ಹಂತದ ಸ್ವತಂತ್ರ ಕುಡಿಯುವ ನೀರಿನ ಯೋಜನೆಯನ್ನು 2004 ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲಾಗಿದೆ.<br>
ii. ದಿನದಿಂದ ದಿನಕ್ಕೆ ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರ ಸಂಖ್ಯೆಯು ಗಣನೀಯವಾಗಿ ಹೆಚ್ಚುತ್ತಿದ್ದು, ಲಕ್ಷಾಂತರ ಭಕ್ತರಿಗೆ ಸಮರ್ಪಕ ಕುಡಿಯುವ ನೀರು ಪೂರೈಸಲು 7.00 ಕಿ,ಮಿ ದೂರದಲ್ಲಿರುವ ಮಲಪ್ರಭಾ ನದಿಯ ಶ್ರೀ ರೇಣುಕಾ ಸಾಗರದಿಂದ 6.00 MLD ಸಾಮರ್ಥ್ಯದ ಎರಡನೇ ಹಂತದ ಸ್ವತಂತ್ರ ಕುಡಿಯುವ ನೀರಿನ ಯೋಜನೆಯನ್ನು 2018-19ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲಾಗಿದೆ. ಇದರಿಂದ 2019-20ನೇ ಸಾಲಿನಲ್ಲಿ</td>
</tr>
</table>

ಸತತ ಮೂರು ತಿಂಗಳ ಅವಧಿಯಲ್ಲಿ ಜರುಗಿದ ಹೊಸ್ತಿಲ ಹುಣ್ಣಿಮೆ, ಬನದ ಹುಣ್ಣಿಮೆ ಹಾಗೂ ಭಾರತ ಹುಣ್ಣಿಮೆ ಜಾತ್ರೆಗಳಿಗೆ ಆಗಮಿಸಿದ ಲಕ್ಷಾಂತರ ಭಕ್ತರಿಗೆ ಸಮರ್ಪಕವಾಗಿ ನೀರು ಪೂರೈಕೆ ಮಾಡಲಾಗಿದೆ.

2. <u>ಶೌಚಾಲಯ ಸೌಲಭ್ಯ ಕಲ್ಪಿಸುವ ಬಗ್ಗೆ.</u>

i. ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡದ ಐದು ವಿವಿಧ ಸ್ಥಳಗಳಲ್ಲಿ ಶೌಚಾಲಯಗಳನ್ನು ನಿರ್ಮಿಸಲಾಗಿದೆ. ಪ್ರತಿ ಶೌಚಾಲಯದಲ್ಲಿ ಪುರುಷ ಹಾಗೂ ಮಹಿಳೆಯರಿಗೆ ಪತ್ಯೇಕವಾಗಿ 10 ಸೀಟು ಗಳ ಶೌಚಾಲಯ, 2 ಸ್ನಾನಗೃಹ ಹಾಗೂ ಎರಡು ಮೂತ್ರಿ ಸೀಟ್‌ಗಳನ್ನು ಅಳವಡಿಸಲಾಗಿದ್ದು, ಒಟ್ಟು 100 ಸೀಟಗಳ ಶೌಚಾಲಯ, 20 ಸ್ನಾನಗೃಹ ಹಾಗೂ 20 ಮೂತ್ರಿ ಸೀಟಗಳನ್ನು ಅಳವಡಿಸಲಾಗಿದೆ.

ii. ದೇವಸ್ಥಾನದ ಉತ್ತರದ ಪ್ರವೇಶ ಮಾರ್ಗದಲ್ಲಿ ಸುಲಭ ಶೌಚಾಲಯ ಇಂಟರ್‌ನ್ಯಾಶನಲ್ ಸಂಸ್ಥೆ, ಬೆಂಗಳೂರು ಅವರು ನಿರ್ಮಿಸಿದ್ದು, ಇದರಲ್ಲಿ ಪುರುಷರಿಗೆ 4-ಸೀಟಿನ ಶೌಚಾಲಯಗಳು, 3-ಸ್ನಾನಗೃಹಗಳು, 4-ಮೂತ್ರಿಗಳು, 2-ವಾಶ್ ಬೆಸಿನ್ ಹಾಗೂ ಮಹಿಳೆಯರಿಗೆ, 3-ಸೀಟಿನ ಶೌಚಾಲಯಗಳು, 2-ಸ್ನಾನಗೃಹ, 2-ವಾಶ್‌ಬೆಸಿನ್ ಗಳನ್ನು ಅಳವಡಿಸಲಾಗಿದೆ.

iii. ಸ್ವಚ್ಚ ಭಾರತ ಮಿಷನ್ ಯೋಜನೆಯಡಿಯಲ್ಲಿ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ ಕರ್ನಾಟಕ ಸರ್ಕಾರ ಅವರ ಅನುದಾನದಡಿ ಶ್ರೀ ಕ್ಷೇತ್ರದ ವಿವಿಧ 20 ಸ್ಥಳಗಳಲ್ಲಿ ಸುಲಭ ಶೌಚಾಲಯ ಹಾಗೂ ಸ್ನಾನಗೃಹಗಳನ್ನು ನಿರ್ಮಿಸಲಾಗಿದೆ. ಪ್ರತಿಯೊಂದರಲ್ಲಿ ಪುರುಷ ಹಾಗೂ ಮಹಿಳೆಯರಿಗೆ ಪ್ರತ್ಯೇಕ ವ್ಯವಸ್ಥೆ ಇದ್ದು, ಪ್ರತಿಯೊಂದರಲ್ಲಿ 10 ಶೌಚಾಲಯ, ಅಂಗವಿಕಲರಿಗೆ 2-ಶೌಚಾಲಯ, 2-ಸ್ನಾನಗೃಹಗಳು, 4-ಹ್ಯಾಂಡ್‌ವಾಷ್, ಯೊರಿನಲ್ಸ್-3 ಗಳನ್ನು ಅಳವಡಿಸಲಾಗಿದೆ.

iv. ಪ್ರವಾಸೋದ್ಯಮ ಇಲಾಖೆ ಅನುದಾನದಡಿಯಲ್ಲಿ ಸಾಮೂಹಿಕ ಶೌಚಾಲಯ ಹಾಗೂ ಸ್ನಾನಗೃಹ ಮತ್ತು ಮತ್ತು ಲಗೇಜ್ ಕೊಠಡಿ ವ್ಯವಸ್ಥೆಯನ್ನು ಮಾಡಲು ಉದ್ದೇಶಿಸಲಾಗಿದೆ. ಹಣ ಮಂಜೂರಾಗಿದ್ದು, ಕಾಮಗಾರಿ ಪ್ರಾರಂಭಿಸಬೇಕಾಗಿದೆ.

3. <u>ವಸತಿ ಸೌಲಭ್ಯ ಕಲ್ಪಿಸುವ ಬಗ್ಗೆ.</u>

i. ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರಿಗೆ ಹೆಚ್ಚಿನ ವಸತಿ ಸೌಕರ್ಯ ಒದಗಿಸುವ ಹಿತದೃಷ್ಟಿಯಿಂದ ಅಂದಾಜು 153.00 ಲಕ್ಷಗಳ ವೆಚ್ಚದಲ್ಲಿ 246 ಕೊಠಡಿಗಳುಳ್ಳ ವಸತಿ ಸಂಕೀರ್ಣವನ್ನು ನಿರ್ಮಿಸಲಾಗಿದೆ.

ii. ಶ್ರೀ ಕ್ಷೇತ್ರದ ಟಿಎಸ್‌ಎಸ್ ಸಂಖ್ಯೆ237 ಮತ್ತು 234 ರಲ್ಲಿ ಭಕ್ತರ ಹೆಚ್ಚಿನ ಸಂಖ್ಯೆಗೆ ಅನುಗುಣವಾಗಿ 46 ಕೊಠಡಿಗಳುಳ್ಳ ಯಾತ್ರಿನಿವಾಸ ಕಟ್ಟಡ ನಿರ್ಮಸಲಾಗಿದೆ. ಇವುಗಳಲ್ಲಿ 18 ವಿಐಪಿ ಕೊಠಡಿಗಳು ಇರುತ್ತವೆ.

| | | |
|---|---|---|
| | | iii. ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರಿಗೆ ವಸತಿ ಸೌಕರ್ಯ ಒದಗಿಸುವ ಹಿತದೃಷ್ಟಿಯಿಂದ 57 ಕೊಠಡಿಗಳುಳ್ಳ ವಸತಿ ಸಂಕೀರ್ಣವನ್ನು ನಿರ್ಮಿಸಲಾಗಿದೆ.<br>iv. ಸಮೂಹ ಭಕ್ತರಿಗೆ ವಸತಿ ಸೌಕರ್ಯ ಒದಗಿಸುವ ಉದ್ದೇಶದಿಂದ ಆರು ಡಾರ್ಮೇಟ್ರಿಗಳನ್ನು ನಿರ್ಮಿಸಲಾಗಿದೆ.<br>v. ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರು ಶ್ರೀ ದೇವಿಗೆ ನೈವೇದ್ಯ ತಯಾರಿಸಿ, ಅರ್ಪಿಸಲು ಮತ್ತು ತಂಗಲು ಅನುಕೂಲವಾಗುವಂತೆ 25 ಜನ ಸಾಮರ್ಥ್ಯದ ಎರಡು ಮಹಡಿಗಳ ನಾಲ್ಕು ಮತ್ತು 50 ಜನ ಸಾಮರ್ಥ್ಯದ ಎರಡು ಮಹಡಿಗಳ ನಾಲ್ಕು ಕಟ್ಟಡ ನಿರ್ಮಾಣವು ಮುಕ್ತಾಯ ಹಂತದಲ್ಲಿದೆ.<br>vi. ಪ್ರವಾಸೋದ್ಯಮ ಇಲಾಖೆಯಿಂದ ತಂಗುದಾಣ, ಅಡುಗೆ ಮನೆ ಹಾಗೂ ಪೂಜಾ ಗದ್ದಿಗೆ ಒಳಗೊಂಡಂತೆ 20 ಜನ ಸಾಮರ್ಥ್ಯದ 40 ಕೊಠಡಿ ಹಾಗೂ 10 ಜನ ಸಾಮರ್ಥ್ಯದ 20 ಕೊಠಡಿಗಳ ನಿರ್ಮಾಣ ಕಾಮಗಾರಿಯು ಪ್ರಾರಂಭದ ಹಂತದಲ್ಲಿದೆ.<br><br>4. <u>ವಾಹನ ನಿಲುಗಡೆ ವ್ಯವಸ್ಥೆ ಕಲ್ಪಿಸುವ ಬಗ್ಗೆ</u><br>i. ದೇವಸ್ಥಾನದ ಪಶ್ಚಿಮದಲ್ಲಿಯ ಸುಮಾರು 321 ಎಕರೆ ಜಮೀನಿನಲ್ಲಿ ವರ್ತುಲ ಮತ್ತು ಕೂಡು ರಸ್ತೆಗಳನ್ನು ನಿರ್ಮಿಸಲಾಗಿದ್ದು, ವರ್ತುಲ ಮತ್ತು ಕೂಡು ರಸ್ತೆಗಳ ಮಧ್ಯದಲ್ಲಿಯ ಸುಮಾರು 20 ಎಕರೆ ಜಾಗದಲ್ಲಿ ವಾಹನಗಳ ನಿಲುಗಡೆಗಾಗಿ ವ್ಯವಸ್ಥೆ ಮಾಡಲಾಗಿದೆ.<br>ii. ದೇವಸ್ಥಾನದ ಪೂರ್ವಕ್ಕೆ ಸುಮಾರು 325 ಎಕರೆ ಜಮೀನಿನಲ್ಲಿ ವರ್ತುಲ ರಸ್ತೆ, ಕೂಡು ರಸ್ತೆ ಹಾಗೂ ಸೆಕ್ಟರ್‌ಗಳ ಅಭಿವೃದ್ಧಿ ಮಾಡಲಾಗಿದೆ.<br>iii. ದೇವಸ್ಥಾನದ ಉತ್ತರದಲ್ಲಿ ಸುಮಾರು ಎರಡು ಎಕರೆ ಜಾಗದಲ್ಲಿ ವಾಹನ ನೀಲುಗಡೆಗೆ ವ್ಯವಸ್ಥೆ ಮಾಡಲಾಗಿದೆ.<br>iv. ಪ್ರಾವಾಸೋದ್ಯಮ ಇಲಾಖೆ ಕರ್ನಾಟಕ ಸರಕಾರ ಅವರ ಅನುದಾನದಡಿ 150 ನಾಲ್ಕುಚಕ್ರ ವಾಹನ, 500 ದ್ವಿಚಕ್ರವಾಹನಗಳಿಗೆ ಪಾರ್ಕಿಂಗ್ ನಿರ್ಮಾಣ ಮಾಡಲು ಉದ್ದೇಶಿಸಲಾಗಿದ್ದು, ಕಾಮಗಾರಿ ಪ್ರಾರಂಭಿಸಲು ಪರಿಶೀಲನಾ ಹಂತದಲ್ಲಿದೆ. |

(ಸಂಖ್ಯೆಕಂಇ 59 ಮುಸಪ್ರ 2020)

(ಕೋಟಾ ಶ್ರೀನಿವಾಸ ಪೂಜಾರಿ)
ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು
ಮತ್ತು ಒಳನಾಡು ಜಲ ಸಾರಿಗೆ ಸಚಿವರು.

# ಅನುಬಂಧ –1

| ಕ್ರ.ಸಂ | ಕಾಮಗಾರಿಗಳ ವಿವರ | ಅನುಷ್ಠಾನದ ವಾಸ್ತವಿಕ ವೆಚ್ಚ/ ಅಂದಾಜು ವೆಚ್ಚ. | |
|---|---|---|---|
| | | ಸರಕಾರದ ಅನುದಾನ ರೂ. ಲಕ್ಷಗಳಲ್ಲಿ | ದೇವಸ್ಥಾನದ ನಿಧಿ. ರೂ. ಲಕ್ಷಗಳಲ್ಲಿ. |
| 1 | **ಭೂಸ್ವಾಧೀನ:** ದೇವಸ್ಥಾನದ ಪೌಳಿ ಕಟ್ಟಡದ ಹೊರಗೋಡೆಗೆ ಹೊಂದಿ/ಹೊರ ಆವರಣದಲ್ಲಿ ಇರುವ ಖಾಸಗಿ ಕಟ್ಟಡಗಳನ್ನು ಭೂಸ್ವಾಧೀನ ಮಾಡಿಕೊಂಡು, ಕಟ್ಟಡಗಳನ್ನು ನೆಲಸಮ ಮಾಡಿ, ಸದರಿ ಜಾಗೆಯನ್ನು ದೇವಸ್ಥಾನದ ವತಿಯಿಂದ ಅಭಿವೃದ್ಧಿಪಡಿಸಿ ಭಕ್ತರ ಮುಕ್ತ ಸಂಚಾರಕ್ಕೆ ಅವಕಾಶ ಮಾಡಿಕೊಡಲಾಗಿದೆ. (ಭೂಸ್ವಾಧೀನ ಪಡೆಸಿಕೊಳ್ಳಲಾದ ಜಾಗೆಯ ಒಟ್ಟು ವಿಸ್ತೀರ್ಣ.20 ಗುಂ. 930 ಚ.ಅಡಿ) | | |
| | | – | 50.51 |
| 2 | **ವಸತಿ ಸಂಕೀರ್ಣ:** ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರಿಗೆ ವಸತಿ ಸೌಕರ್ಯ ಒದಗಿಸುವ ಹಿತದೃಷ್ಟಿಯಿಂದ 57 ಕೊಠಡಿಗಳುಳ್ಳ ವಸತಿ ಸಂಕೀರ್ಣವಸನ್ನು ನಿರ್ಮಿಸಲಾಗಿದೆ. | | |
| | | – | 53.72 |
| | **ಡಾರ್ಮೇಟ್ರಿ:** ಸಮೂಹ ಭಕ್ತರಿಗೆ ವಸತಿ ಸೌಕರ್ಯ ಒದಗಿಸುವ ಉದ್ದೇಶದಿಂದ ಆರು ಡಾರ್ಮೇಟ್ರಿಗಳನ್ನು ನಿರ್ಮಿಸಲಾಗಿದೆ. | | |
| | | 23.98 | 5.62 |
| | **ಕಲ್ಯಾಣ ಮಂಟಪ ಕಟ್ಟಡ ನಿರ್ಮಾಣ:** ಶ್ರೀ ಕ್ಷೇತ್ರದಲ್ಲಿ ಭಕ್ತರು ಮದುವೆ, ಉಪನಯನಗಳಂತಹ ಶುಭ ಸಮಾರಂಭಗಳನ್ನು ನೆರವೇರಿಸಲು ಅನುಕೂಲವಾಗುವಂತೆ ಕಲ್ಯಾಣ ಮಂಟಪ ಕಟ್ಟಡವನ್ನು ನಿರ್ಮಿಸಲಾಗಿದೆ. | | |
| | | | 30.60 |
| 3. | **ಯಾತ್ರಿನಿವಾಸ ಕಟ್ಟಡ ನಿರ್ಮಾಣ:** ಶ್ರೀ ಕ್ಷೇತ್ರದ ವ್ಹಿ ಎಸ್ಎಸ್ ಸಂಖ್ಯೆ:237 ಮತ್ತು 234 ರಲ್ಲಿ ಭಕ್ತರ ಹೆಚ್ಚಿನ ಸಂಖ್ಯೆಗೆ ಅನುಗುಣವಾಗಿ 46 ಕೊಠಡಿಗಳುಳ್ಳ ಯಾತ್ರಿನಿವಾಸ ಕಟ್ಟಡ ನಿರ್ಮಸಲಾಗಿದೆ. ಇವುಗಳಲ್ಲಿ 18 ವ್ಹಿ ಐ ಪಿ ಕೊಠಡಿಗಳು ಇರುತ್ತವೆ. | | |
| | | 60.11 (ಪ್ರವಾಸೋಧ್ಯಮ ಇಲಾಖೆಯ ಅನುದಾನ) | 67.89 |
| | | | |
| 4. | **ವರ್ತುಳ ರಸ್ತೆ ನಿರ್ಮಾಣ:** ದೇವಾಲಯದ ಪಶ್ಚಿಮ ಭಾಗದಲ್ಲಿ ಜನ ಸಂದಣಿಯನ್ನು ನಿಯಂತ್ರಿಸಲು ಮತ್ತು ಭಕ್ತರು/ವಾಹನಗಳ ಸುಗಮ ಸಂಚಾರ ಮತ್ತು ಜಾತ್ರಾ ಸಮಯದಲ್ಲಿ ತಂಗುದಾಣದ ವ್ಯವಸ್ಥೆಗಾಗಿ ವರ್ತುಲ ರಸ್ತೆಗಳ ನಿರ್ಮಾಣ ಮಾಡಲಾಗಿದೆ. | | |
| | | 140.00 | 50.00 |
| 5. | **80 ಅಡಿ ರಸ್ತೆ ನಿರ್ಮಾಣ:** ದೇವಾಲಯದ ಪಶ್ಚಿಮದ ರಸ್ತೆಯನ್ನು 80 ಅಡಿ ಅಗಲದ ರಸ್ತೆಯನ್ನಾಗಿ ಮಾಡಿ ಕಾಂಕ್ರೀಟ್‌ಕರಣ ಮಾಡಲಾಗಿದ್ದು, ಇಳಜಾರಿನಲ್ಲಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. | | |
| | | – | 41.46 |
| 6. | **ವ್ಯಾಪಾರಿ ಮಳಿಗೆ ನಿರ್ಮಾಣ:** ದೇವಸ್ಥಾನದ ಉತ್ತರ ದಿಕ್ಕಿನ ಕೊಳ್ಳದ ಮೇಲೆ 176 ಅಂಗಡಿಗಳುಳ್ಳ ವ್ಯಾಪಾರಿ ಮಳಿಗೆಯನ್ನು ನಿರ್ಮಿಸಲಾಗಿದೆ, | | |
| 7. | **ಸಿಂಗಪೂರ ಮಾದರಿ ವ್ಯಾಪಾರಿ ಮಳಿಗೆ ಕಟ್ಟಡ:** ದೇವಸ್ಥಾನದ ಪಶ್ಚಿಮ ದಿಕ್ಕಿನಲ್ಲಿಯ 80.00ಅಡಿ ಅಗಲದ ರಸ್ತೆಯ ಬದಿಯಲ್ಲಿ 54 ಅಂಗಡಿಗಳುಳ್ಳ ಸಿಂಗಪೂರ ಮಾದರಿ ವ್ಯಾಪಾರಿ ಮಳಿಗೆಯನ್ನು ನಿರ್ಮಿಸಲಾಗಿದೆ. | | |
| | | – | 42.51 |
| | **80 ಅಡಿ ರಸ್ತೆಯ ಎರಡೂ ಬದಿಯಲ್ಲಿ ವ್ಯಾಪಾರಿ ಮಳಿಗೆ ನಿರ್ಮಾಣ:** | | |

| | | | |
|---|---|---|---|
| | ದೇವಸ್ಥಾನದ ಪಶ್ಚಿಮ ದಿಕ್ಕಿನಲ್ಲಿ ಇರುವ 80 ಅಡಿ ರಸ್ತೆಯ ಎರಡೂ ಬದಿಯಲ್ಲಿ ವ್ಯಾಪಾರಿ ಮಳಿಗೆಗಳನ್ನು ನಿರ್ಮಿಸಲಾಗಿದ್ದು, ಸದರಿ ಮಳಿಗೆಯಲ್ಲಿ 54 ಅಂಗಡಿಗಳನ್ನು ನಿರ್ಮಿಸಲಾಗಿದೆ. | | |
| | | 81.76 | |
| 8. | **ರಸ್ತೆಯ ಅಭಿವೃದ್ಧಿ:**<br>ದೇವಾಲಯದ ಉತ್ತರ ದಿಕ್ಕಿನ ಪ್ರವೇಶ ದ್ವಾರದ ರಸ್ತೆಯನ್ನು ಅಗಲಗೊಳಿಸಿ, ಕಾಂಕ್ರೀಟ್‌ಕರಣ ಮಾಡಲಾಗಿದೆ. | | |
| | | - | 10.50 |
| | **ಶ್ರೀ ಕ್ಷೇತ್ರದಲ್ಲಿಯ ಕೂಡು ರಸ್ತೆಗಳ ಕಾಂಕ್ರೀಟ್‌ಕರಣ ಕಾಮಗಾರಿ:**<br>ಶ್ರೀ ಕ್ಷೇತ್ರದಲ್ಲಿಯ ಕೂಡು ರಸ್ತೆಗಳನ್ನು ಆರ್‌ಸಿಸಿ ಕಾಂಕ್ರೀಟ್ ರಸ್ತೆಗಳನ್ನಾಗಿ ಮಾಡಲಾಗಿದೆ. | | |
| | | | 255.00 |
| | ದೇವಸ್ಥಾನದ ಪಶ್ಚಿಮದಲ್ಲಿಯ ವರ್ತುಳ ಮತ್ತು ಕೂಡು ರಸ್ತೆಯ ಮಧ್ಯದಲ್ಲಿಯ ಜಾಗೆಯಲ್ಲಿ ವಾಹನಗಳ ನಿಲುಗಡೆಗಾಗಿ ವ್ಯವಸ್ಥೆ ಮಾಡಲಾಗಿದೆ. ದೇವಸ್ಥಾನದ ಪಶ್ಚಿಮದಲ್ಲಿಯ ವರ್ತುಳ ಮತ್ತು ಕೂಡು ರಸ್ತೆಯ ಮಧ್ಯದಲ್ಲಿಯ ಜಾಗೆಯಲ್ಲಿ ವಾಹನಗಳ ನಿಲುಗಡೆಗಾಗಿ ವ್ಯವಸ್ಥೆ ಮಾಡಲಾಗಿದೆ. | | |
| | | | 91,57 |
| 9. | **ಶೌಚಾಲಯ ನಿರ್ಮಾಣ:**<br>ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡದ ಐದು ವಿವಿಧ ಸ್ಥಳಗಳಲ್ಲಿ ಶೌಚಾಲಯ ನಿರ್ಮಿಸಲಾಗಿದೆ. ಪ್ರತಿ ಶೌಚಾಲಯದಲ್ಲಿ ಪುರುಷ ಹಾಗೂ ಮಹಿಳೆಯರಿಗೆ ಪತ್ಯೇಕವಾಗಿ 10 ಸೀಟು ಗಳ ಶೌಚಾಲಯ, 2 ಸ್ನಾನಗೃಹ ಹಾಗೂ ಎರಡು ಮೂತ್ರಿ ಸೀಟ್‌ಗಳನ್ನು ಅಳವಡಿಸಲಾಗಿದ್ದು, ಒಟ್ಟು 100 ಸೀಟಗಳ ಶೌಚಾಲಯ, 20 ಸ್ನಾನಗೃಹ, ಹಾಗೂ 20 ಮೂತ್ರಿ ಸೀಟಗಳನ್ನು ಅಳವಡಿಸಲಾಗಿದೆ. | | |
| | | 72.15 | 9.45 |
| | **ಸುಲಭ ಶೌಚಾಲಯ;**<br>ದೇವಸ್ಥಾನದ ಉತ್ತರದ ಪ್ರವೇಶ ಮಾರ್ಗದಲ್ಲಿ ಸುಲಭ ಶೌಚಾಲಯ ಇಂಟರ್‌ನ್ಯಾಶನಲ್ ಸಂಸ್ಥೆ, ಬೆಂಗಳೂರು ಅವರು ನಿರ್ಮಿಸಿದ್ದು, ಇದರಲ್ಲಿ ಪುರುಷರಿಗೆ 4-ಸೀಟಿನ ಶೌಚಗಳು,<br>3-ಸ್ನಾನಗೃಹಗಳು,<br>4-ಮೂತ್ರಿಗಳು<br>2-ವಾಶ್ ಬೆಸಿನ್<br>ಹಾಗೂ ಮಹಿಳೆಯರಿಗೆ<br>3-ಸೀಟಿನ ಶೌಚಗಳು,<br>2-ಸ್ನಾನಗೃಹಗಳನ್ನು<br>2-ವಾಶ್‌ಬೆಸಿನ್ ಗಳನ್ನು ಅಳವಡಿಸಲಾಗಿದೆ. | | |
| 10. | **ಸ್ವತಂತ್ರ ಕುಡಿಯುವ ನೀರಿನ ಯೋಜನೆ:**<br>ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರಿಗೆ ಕುಡಿಯುವ ನೀರು ಪೂರೈಸಲು 0.27 ಎಂಜಿಡಿ ಸಾಮರ್ಥ್ಯದ ಸ್ವತಂತ್ರ ಕುಡಿಯುವ ನೀರಿನ ಯೋಜನೆಯನ್ನು ಅನುಷ್ಠಾನಗೊಳಸಲಾಗಿದೆ. | | |
| | | 107.50<br>(ಕೇಂದ್ರ ಸರ್ಕಾರದ ಅನುದಾನ)<br>57.50<br>(ಕರ್ನಾಟಕ ರಾಜ್ಯ ಸರ್ಕಾರದ ಅನುದಾನ) | 89.00 |
| 11. | **ನೀರಿನ ತೊಟ್ಟಿಗಳ ನಿರ್ಮಾಣ:**<br>ಶ್ರೀ ಕ್ಷೇತ್ರದಲ್ಲಿ ಕುಡಿಯುವ ನೀರು ಪೂರೈಕೆಗಾಗಿ ರಸ್ತೆಗಳ ಬದಿಯಲ್ಲಿ ಪ್ರತಿಯೊಂದು 3000.00ಲೀಟರ್ ಸಾಮರ್ಥ್ಯದ 17ನೀರಿನ ತೊಟ್ಟಿಗಳನ್ನು ಅಳವಡಿಸಲಾಗಿದೆ. ಪ್ರತಿ ತೊಟ್ಟಿಗಳಲ್ಲಿ 16 ನಳಗಳ ವ್ಯವಸ್ಥೆ ಇದ್ದು, ಒಟ್ಟು 272 ನಳಗಳ ಜೋಡಣೆ ಮಾಡಲಾಗಿದೆ. | | |
| | | 13.26 | |
| 12. | **ತಂಗುದಾಣಗಳ ನಿರ್ಮಾಣ:**<br>ಶ್ರೀ ಕ್ಷೇತ್ರದ ವಿವಿಧ ಸ್ಥಳಗಳಲ್ಲಿ ಭಕ್ತರು ಕುಳಿತುಕೊಂಡು ವಿಶ್ರಾಂತಿ ಪಡೆಯಲು 15 ತಂಗುದಾಣಗಳನ್ನು ನಿರ್ಮಿಸಲಾಗಿದೆ. | | |
| | | 8.85 | |
| 13. | **ಹೈಮಾಸ್ಟ್ ವಿದ್ಯುತ್ ಬೆಳಕಿನ ವ್ಯವಸ್ಥೆ:** | | |

| | | | |
|---|---|---|---|
| | ಶ್ರೀ ಕ್ಷೇತ್ರದ ವಿವಿಧ ಸ್ಥಳಗಳಲ್ಲಿ ಜಾತ್ರಾ ಹಾಗೂ ಇತರ ದಿನಗಳಲ್ಲಿ ತಂಗುವ ಭಕ್ತರಿಗೆ ವ್ಯಾಪಕ ಬೆಳಕಿನ ವ್ಯವಸ್ಥೆ ಮಾಡುವ ಹಿತದೃಷ್ಟಿಯಿಂದ 20.00 ಅಡಿ ಎತ್ತರದ ಒಂಭತ್ತು ಹೈಮಾಸ್ಟ್ ವಿದ್ಯುತ್ ದೀಪದ ವ್ಯವಸ್ಥೆ ಮಾಡಲಾಗಿದೆ. | | |
| | | - | 27.66 |
| 14. | **ಅತಿಥಿ ಗೃಹ:**<br>ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರಿಗೆ ಹೆಚ್ಚಿನ ವಸತಿ ಸೌಕರ್ಯ ಒದಗಿಸುವ ಹಿತದೃಷ್ಟಿಯಿಂದ ಅಂದಾಜು 153.00 ಲಕ್ಷಗಳ ವೆಚ್ಚದಲ್ಲಿ 246 ಕೊಠಡಿಗಳುಳ್ಳ ವಸತಿ ಸಂಕೀರ್ಣವನ್ನು ನಿರ್ಮಿಸಲಾಗುತ್ತಿದೆ. ಸದರಿ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯಿಂದ ಠೇವಣಿ ವಂತಿಕೆ ಆಧಾರದ ಮೇಲೆ ನಿರ್ವಹಿಸಿಕೊಳ್ಳಲಾಗಿದೆ. ಅಪೂರ್ಣಗೊಂಡ ಬೆಲೆಬಾಳುವ ಕಟ್ಟಡವನ್ನು 19-20 ರಲ್ಲಿ ದೇವಸ್ಥಾನಕ್ಕೆ ಹಸ್ತಾಂತರಿಸಕೊಳ್ಳಲಾಗಿದ್ದು, ಉಳಿಕೆ ಸುಮಾರು ರೂ. 3.65 ಕೋಟಿ ಅಂದಾಜು ಪಟ್ಟಿಯ ಮೊತ್ತದ ಪೈಕಿ 1/3 ರಷ್ಟು ಮೊತ್ತವನ್ನು ಲೋಕೋಪಯೋಗಿ ಇಲಾಖೆಗೆ ಭರಣಾ ಮಾಡಲಾಗಿದೆ. | | |
| | | | 1500.00 |
| | | | 365.00 |
| 15. | **ಯಾತ್ರಿನಿವಾಸ:**<br>ಯಾತ್ರಿನಿವಾಸ ಕಟ್ಟಡದ ಎರಡನೇ ಮಹಡಿಯಲ್ಲಿ 15 ಕೊಠಡಿಗಳನ್ನು ನಿಮಿಸಲಾಗಿದೆ. | | |
| | | 80.00 (ಪ್ರವಾಸೋಧ್ಯಮ ಇಲಾಖೆಯ ಅನುದಾನ) | |
| 16. | **ವ್ಯಾಪಾರಿ ಮಳಿಗೆಗಳು:**<br>ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡದ ಸವದತ್ತಿ-ಹಂಚಿನಾಳ ರಸ್ತೆಯ ಪಶ್ಚಿಮ ಬದಿಯಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಅನುದಾನದಡಿ 44 ವ್ಯಾಪಾರಿ ಮಳಿಗೆಗಳನ್ನು ನಿರ್ಮಿಸಲಾಗಿದೆ. | | |
| | | 100.00 | |
| 17 | **ಭೂಸ್ವಾಧೀನ:**<br>ದೇವಸ್ಥಾನದ ಪೌಳಿ ಕಟ್ಟಡದ ಹೊರಗಡೆ ಪಶ್ಚಿಮ ದಿಕ್ಕಿನಲ್ಲಿರುವ 23 ಮಾಲ್ಕೀ ಆಸ್ತಿಗಳನ್ನು ದೇವಸ್ಥಾನದ ಅಭಿವೃದ್ಧಿ ಕಾರ್ಯಕ್ಕಾಗಿ ಭೂಸ್ವಾಧಿನ ಪಡಿಸಿಕೊಳ್ಳಲಾಗುತ್ತಿದ್ದು, ಪ್ರಕರಣವು ಕಂದಾಯ ಇಲಾಖೆಯಿಂದ ದೇವಸ್ಥಾನಕ್ಕೆ ಕಬ್ಜಾ ನೀಡುವ ಹಂತದಲ್ಲಿರುತ್ತದೆ. | | |
| | | | 49.05 |
| | **ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡದ ಸರ್ವಾಂಗೀಣ ಅಭಿವೃದ್ಧಿಗಾಗಿ 2017-18 ರಲ್ಲಿ ಲೋಕೋಪಯೋಗಿ ಇಲಾಖೆಯ ಪ್ರಧಾನ ಮುಖ್ಯ ವಾಸ್ತು ಶಿಲ್ಪಿಗಳಿಂದ ಪರಿಷ್ಕೃತ ಮಾಷ್ಟರ್ ಪ್ಲ್ಯಾನನ್ನು ತಯಾರಿಸಿಕೊಳ್ಳಲಾಗಿದ್ದು, ಅದರಂತೆ ಈ ಕೆಳಗಿನ ಕಾಗಾರಿಗಳನ್ನು ಕೈಗೊಳ್ಳಲಾಗದೆ.** | | |
| 19. | **ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ, ಕರ್ನಾಟಕ ಸರ್ಕಾರ ಅವರ ಅನುದಾನದಡಿ** ರೂ. 3120.00 ಗಳ ಅನುದಾನದಡಿ ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡಕ್ಕೆ ಎರಡನೇ ಸ್ವತಂತ್ರ ಕುಡಿಯುವ ನೀರು ಸರಬರಾಜು ಯೋಜನೆಯುನ್ನು ಅನುಷ್ಠಾನಗೊಳಿಸಿದ್ದು, ಇದರಿಂದ ಸಮಾರು 600 ರಿಂದ 700 ಎಕರೆ ಪ್ರದೇಶದಲ್ಲಿ ಜಾತ್ರೆಗೆ ವರ್ಷವಿಡಿ ಆಗಮಿಸುವ ಭಕ್ತರಿಗೆ ನೀರು ಪೂರೈಕೆಯಗುತ್ತಿದ್ದು, 2019-20 ನೇ ಸಾಲಿನ ಡಿಸೆಂಬರ-2019 ರಲ್ಲಿ ಜರುಗಿದ ಹೊಸ್ತಿಲ ಹುಣ್ಣಿವೆ ಯಿಂದ ಪ್ರಾರಂಭಗೊಂಡು ಜನ್‌ವರಿ-2020 ರ ಬನದ ಹುಣ್ಣಿವೆ ಹಾಗೂ ಭಾರತ ಹುಣ್ಣಿವೆಗಳ ನಿರಂತರ ಮೂರು ತಿಂಗಳ ಅವದಿಗೆ ಶ್ರೀ ಕ್ಷೇತ್ರಕ್ಕೆ ಆಗಮಿಸಿದ ಲಕ್ಷಾಂತರ ಭಕ್ತರಿಗೆ ಸಮರ್ಪಕ ನೀರು ಸರಬರಾಜು ವ್ಯವಸ್ಥೆಯಾಗಿದ್ದು ಇದೊಂದು ಐತಿಹಾಸಿಕ ಸಾಧನೆಯಾಗಿದೆ. ಇದರಿಂದ ಭಕ್ತರು ಸಂತೃಪ್ತಿಯಿಂದ ಜಾತ್ರೆಮಾಡಿ ತಮ್ಮ ಊರುಗಳಿಗೆ ಮರಳಿರುತ್ತಾರೆ ಎಂದು ಉಲ್ಲೇಖಿಸಲು ಹೆಮ್ಮೆಯಾಗುತ್ತದೆ. | | |
| | **ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ, ಕರ್ನಾಟಕ ಸರ್ಕಾರ ಅವರ ಅನುದಾನದಡಿ.** | 3120.00 | |
| 20. | **ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಅವರ ಅನುದಾನದಡಿ ರೂ. 18.00 ಕೋಟಿಗಳ ವೆಚ್ಚದಲ್ಲಿ**<br>1. ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡದ ಪೂರ್ವದಿಕ್ಕಿನ ಸುಮಾರು 350 ಎಕರೆ ಜಮೀನಿನಲ್ಲಿ ವಿಶಾಲವಾದ ವರ್ತುಳ ರಸ್ತೆ, ಕೂಡುರಸ್ತೆ,<br>2. ರಸ್ತೆಗಳ ಅಗಲೀಕರಣ.<br>3. ಮತ್ತು ಸುಮಾರು 3500.00 ಚದರ ಮೀಟರ್ ನ ಸೆಕ್ಟರ್ ನೆಲಕ್ಕೆ ಪೇವರ್ಸ್‌ಗಳನ್ನು ಅಳವಡಿಸಿ ಜಾತ್ರಾ | | |

| | | | |
|---|---|---|---|
| | ಪ್ರದೇಶವನ್ನು ಅಭಿವೃದ್ಧಿ ಕಾರ್ಯಗಳು 2019-20 ನೇ ಸಾಲಿನ ಪ್ರಾರಂಭದಲ್ಲಿಯೇ ಮುಕ್ತಾಯಗೊಂಡಿದ್ದು, ಲಕ್ಷಾಂತರ ಭಕ್ತರಿಗೆ ಅನುಕೂಲವಾಗಿದೆ. | | |
| | **ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಅವರ ಅನುದಾನದಡಿ** | 1800.00 | |
| 21. | ದೇವಸ್ಥಾನದ ನಿಧಿಯಿಂದ ಸುಮಾರು **ರೂ. 30.53 ಕೋಟಿಗಳ** ವೆಚ್ಚದಲ್ಲಿ ಈ ಕೆಳಗಿನ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದಗದು, ಎಲ್ಲ ಕಾಮಗಾರಿಗಳೂ ಮುಕ್ತಾಯ ಹಂತದಲ್ಲಿವೆ.<br>1. ರಸ್ತೆಗಳ ಬದಿಗುಂಟ 275 ವ್ಯಾಪಾರಿ ಮಳಿಗೆಗಳ ನಿರ್ಮಾಣ,<br>2. ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರು ಶ್ರೀ ದೇವಿಗೆ ನೈವೇದ್ಯೆ ತಯಾರಿಸಿ, ಅರ್ಪಿಸಲು ಮತ್ತು ತಂಗಲು ಅನುಕೂಲವಾಗುವಂತೆ 25 ಜನ ಸಾಮರ್ಥ್ಯದ ಎರಡು ಮಹಡಿಗಳ ನಾಲ್ಕು ಮತ್ತು 50 ಜನ ಸಾಮರ್ಥ್ಯದ ಎರಡು ಮಹಡಿಗಳ ನಾಲ್ಕು ಕಟ್ಟಡ ನಿರ್ಮಾಣ,<br>3. ಸುಮಾರು 20 ಎಕರೆ ಸೆಕ್ಟರ್‌ಗಳಲ್ಲಿ ಜಾತ್ರಾ ವಾಹನಗಳ ನಿಲುಗಡೆ ವ್ಯವಸ್ಥೆ,<br>4. ವರ್ಷವಿಡಿ ವಾಹನ ನಿಲುಗಡೆಗಾಗಿ ದೇವಸ್ಥಾನದ ಉತ್ತರದ ಕೊಳ್ಳಕ್ಕೆ ಬಾಕ್ಸ್ ಕಲ್ವರ್ಟ್ ನಿರ್ಮಿಸಿ ಸುಮಾರು ಎರಡು ಎಕರೆ ಜಾಗೆಯ ಅಭಿವೃದ್ಧಿ ಕಾರ್ಯಗಳನ್ನು 2018-19 ರ ಸಾಲಿನಲ್ಲಿ ಪ್ರಾರಂಭಿಸಲಾಗಿದ್ದು, ಸದರಿ ಎಲ್ಲ ಕಾಮಗಾರಿಗಳೂ ಮುಕ್ತಾಯ ಹಂತದಲ್ಲಿವೆ. | | |
| | | | 3053.00 |
| 22 | **ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡಕ್ಕೆ ಸಮಗ್ರ ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ರೂ. 2086.00 ಲಕ್ಷಗಳ ದೇವಸ್ಥಾನದ ನಿಧಿಯಿಂದ ಉದ್ದೇಶಿಸಲಾಗಿದ್ದು, ಆಡಳಿತಾತ್ಮಕ ಅನಮೋದನೆಗಾಗಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ.** | | |
| 23. | 1. **ಕರ್ನಾಟಕ ಪ್ರವಾಸೋಧ್ಯಮ ಇಲಖೆಯ ರೂ. 22.25 ಕೋಟಿಗಳ** ಅನುದಾನದಲ್ಲಿ ಶ್ರೀ ಕ್ಷೇತ್ರ ಯಲ್ಲಮ್ಮನಗುಡ್ಡದಲ್ಲಿ.<br>2. ಭಕ್ತರು ತಂಗಲು ತಂಗುದಾಣಗಳು,<br>3. 150 ನಾಲ್ಕು ಚಕ್ರ ವಾಹನ, 500 ದ್ವಿಚಕ್ರವಾಹನಗಳಿಗೆ ಪಾರ್ಕಿಂಗ್ ನಿರ್ಮಾಣ,<br>4. ತಂಗುದಾಣ ನಿವೇಶನದಲ್ಲಿ ರಸ್ತೆ, ಚರಂಡಿ, ಆವರಗೋಡೆ ನಿರ್ಮಾಣ,<br>5. ಸಿದ್ದನಕೊಳ್ಳದಲ್ಲಿ ಚೆಕ್ ಡ್ಯಾಮ್ ನಿರ್ಮಾಣ ಮಾಡಿ 150 ಎಕರೆ ದೇವಸ್ಥಾನದ ಜಮೀನಿನಲ್ಲಿ ಅಭಿವೃದ್ಧಿಪಡಿಸಿದ ದೈವಿ ವನದಲ್ಲಿಯ ಗಿಡ ಮರಗಳಿಗೆ ನೀರು ಪೂರೈಕೆ ವ್ಯವಸ್ಥೆ ಮಾಡುವುದು ಸದರಿ ಎಲ್ಲ ಕಾಮಗಾರಿಗಳನ್ನು ಲೋಕೋಪಯೋಗಿ ಇಲಾಖೆಯಿಂದ ನಿರ್ವಹಿಸಿಕೊಳ್ಳಲಾಗುತ್ತಿದ್ದು, ಸದರಿ ಎಲ್ಲ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆಗಾಗಿ ಪ್ರವಾಸೋಧ್ಯಮ ಇಲಾಖೆಗೆ ಕಳುಹಿಸಿಕೊಡಲಾಗಿದೆ. | | |

H. L. Varalakshmi

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)